# 62

# ಜಾನಪದ ಸಾಹಿತ್ಯ

ಲೇಖಕ:
ಶ್ರೀ ಪಡಾರು ಮಹಾಬಲೇಶ್ವರ ಭಟ್ಟ,
ಕೊಳನಾಡು. (ದ.ಕ.)

೧. ಮದುವೆಯ ಹಾಡು
೨. ಹೆಣ್ಣು ಹೃದಯದ ಹಾಡು
೩. ಸುಗ್ಗಿಯ ಹಾಡು

1955.




ಒಂದಾಣೆ ಮಾಲೆ

# ಒಂದಾಣೆ ಮಾಲೆಯಲ್ಲಿ ಈ ವರೆಗೆ ಪ್ರಕಟವಾದ ಪುಸ್ತಕಗಳು

೧. *ಕೆಪ್ಪಟಿರಾಯ (ವಿನೋದ ಕಥೆ)
೨. *ನಾರೀಶ್ವರರು (ಏಕಾಂಕ ಪ್ರಹಸನ)
೩. *ಕಳ್ಳನಿಗೆ ಸಂಭಾವನೆ ಮತ್ತು ಇತರ ಕಥೆಗಳು.
೪. *ಸದ್ರಿಸುಬ್ಬ (ಏಕಾಂಕ ಪ್ರಹಸನ)
೫. *ಅದ್ಭುತತ್ಯಾಗ ಮತ್ತು ಇತರ ಕಥೆಗಳು
೬. ಚುನಾವಣೆ ಅರ್ಥಾತ್ ಬನಾವಣೆ (ಏಕಾಂಕ ಪ್ರಹಸನ)
೭. *'ಬೀಡಿ ಸೇದಬೇಡಿ' ಮತ್ತು 'ಆ ಮಗು' (ವಿನೋದ ಕಥೆಗಳು)
೮. *ಇಂಗ್ಲಿಷ್-ಕನ್ನಡ ಅರ್ಥಕೋಶ
೯. *ಲಂಚಕ್ಕೆ ಸಂಚಕಾರ
೧೦. *ಟಿಶ್ಯೂ ಔಷಧಿಗಳ ಕೈಪಿಡಿ.
೧೧. ಶ್ರೀಕ್ಷೇತ್ರ ಧರ್ಮಸ್ಥಳ (ತೃ. ಮುದ್ರಣ)
೧೨. ಜೀವದ ಮೌಲ್ಯ ಮತ್ತು ಇತರ ಕಥೆಗಳು
೧೩. ಸತ್ತವನ ಸೇಡು ಮತ್ತು ಇತರ ಕಥೆಗಳು
೧೪. ವೆಂಕಟನ ಸಂಕಟ (ಏಕಾಂಕ ಪ್ರಹಸನ)
೧೫. ಬಾಬಿಗೆ ಬಾಸಿಂಗ (ಏಕಾಂಕ ಪ್ರಹಸನ)
೧೬. ವೇಣೂರಿನ ಗತವೈಭವ.
೧೭. ಒಗಟುಗಳು [ದ್ವಿತೀಯ ಮುದ್ರಣ]
೧೮. ಜಗಳಗಂಟ ಮತ್ತು ಇತರ ಕಥೆಗಳು
೧೯. ರಥೋತ್ಸವ.
೨೦. ಕರಿನಾಯಿ ಮತ್ತು ಮುಷ್ಪ
೨೧. *ಭಾರತದ ಮಹಾನಗರಗಳು (ಭಾಗ ೧)
೨೨. ತಿರುಕ್ಕುರಲ್
೨೩. ಸೂರ್ಯನ ಸಂಸಾರ ಮತ್ತು ಇತರ ಕಥೆಗಳು.
೨೪. *ಭಾರತದ ಮಹಾನಗರಗಳು (ಭಾಗ ೨)
೨೫. ಧೈರ್ಯ ಮತ್ತು ಇತರ ಸತ್ಯಕಥೆಗಳು
೨೬. *ಮಾರಾವತಾರ (ಏಕಪಾತ್ರ ಯಕ್ಷಗಾನ ಪ್ರಬಂಧ)
೨೭. ಹಾಸವಿಲಾಸ (ನಗೆಹನಿಗಳು)
೨೮. ಸತ್ಯವಂತ ಬಾಜಿ (ಏಕಾಂಕ ಪ್ರಹಸನ)
೨೯. ಜಾಣ್ಮೆಯ ಒಗಟುಗಳು
೩೦. ಜಾತಕ ಕಥೆಗಳು
೩೧. ಕಾರ್ಕಳದ ಚರಿತ್ರೆ
೩೨. ಮರ್ಜಿ (ಏಕಾಂಕ ಪ್ರಹಸನ)
೩೩. ದರ್ಶನದ ಕಥೆಗಳು
೩೪. ಅಳುವಿನ ಹೊಳೆ ಮತ್ತು ಕೇಶವಭೂಪ (ಮಕ್ಕಳ ಕಥೆಗಳು)
೩೫. ಶರಾಬಿನ ಪೀಪಾಯಿಗಳು
೩೬. ಉಪದೇಶ ಶತಕ
೩೭. ನಿಮಗೆ ಗೊತ್ತಿದೆಯೇ?
೩೮. ಚತುರ ಚಮತ್ಕಾರ
೩೯. ಸತೀ ಸಾವಿತ್ರಿ [ಕಥೆಗಳು
೪೦. ಆಭರಣಗಳ ಪೆಟ್ಟಿಗೆ, ಮತ್ತು ಇತರ
೪೧. ಭಾರತದ ಮಂತ್ರಿಮಂಡಲಗಳು (ದ್ವಿ.
೪೨. ಕಾಲುಬಳೆಯ ಕಥೆ [ಮುದ್ರಣ)
೪೩. ಭಾರತದ ನಾಲ್ಕು ಕಲಶಗಳು
೪೪. ವ್ಯಸನದಿಂದ ಲಾಭ ಮತ್ತು ಇತರ
೪೫. ಸುಭಾಷಿತ [ಕಥೆಗಳು
೪೬. ೧೮೫೭ರ "ಸಿಪಾಯಿ ದಂಗೆ"
೪೭. ಅಕಾಂಡ ತಾಂಡವ (ರೇಡಿಯೋ ನಾಟಕ)
೪೮ ಸಾಹಸದ ಕಥೆಗಳು
೪೯ ಸಂಜ್ಞಾ ಜ್ಞಾನ ಕೋಶ
೫೦ ಪಂಡಿತನ ಪಿಟಿಲು
೫೧ ಭೋಗಯಾತ್ರೆ
೫೨. ಸಂಗ್ರಾಮಸಿಂಹ
೫೩. ಧರ್ಮ ಶಿಕ್ಷಾ
೫೪. ಮಹಾತ್ಮ
೫೫. ಮೀರಾಬಾಯಿ (ಏಕಾಂಕ ನಾಟಕ)
೫೬. ವೀರರಮಣಿ ಕರ್ಮದೇವಿ
೫೭. ಅರಳಿದ ನಗು
೫೮. ಸಚಿತ್ರ ಜಪಾನ್
೫೯. ಚುಟ್ಟಿ ಬಿಟ್ಟ ಧಿಟ್ಟ (ಏಕಾಂಕ ಪ್ರಹಸನ)
೬೦. ನಿರಪರಾಧಿ
೬೧. ಭಕ್ತವಾಣಿ
೬೨. ಜಾನಪದ ಸಾಹಿತ್ಯ

* ಈ ಗುರುತು ಹಾಕಿದ ಪುಸ್ತಕಗಳ ಪ್ರತಿಗಳು ಮುಗಿದಿವೆ.

ಈ ವರೆಗೆ ಅರುವತ್ತೆರಡು ಪುಸ್ತಕಗಳಲ್ಲಿ, ಅರುವತ್ತೆರಡು ಆಣೆಗಳಿಗೆ, 'ಒಂದಾಣೆ ಮಾಲೆ'ಯು, ಹೊದಿಕೆ ಕೂಡಿ, 1352 ಪುಟಗಳನ್ನು ಕೊಟ್ಟಿರುತ್ತದೆ.

# ಜಾನಪದ ಸಾಹಿತ್ಯ

## ೧. ಮದುವೆಯ ಹಾಡು

ಕಾಡುಮಲ್ಲಿಗೆಯನ್ನು ಕಂಡಾಗ ಕಂಡಿತವಾಗಿಯೂ ಅದನ್ನು ಕಿತ್ತು ಮೂಸಿ ಮುಡಿಯಲ್ಲಿಟ್ಟುಕೊಳ್ಳಿ. ಎಷ್ಟು ಪರಿಮಳ! ಏನು ಸೊಗಸು! ಕಾಡುಮಲ್ಲಿಗೆಯಂತಿರುವ ಜಾನಪದ ಹಾಡು ಇಂದು ಯಾರಿಗೂ ಬೇಡವಾಗಿದೆ. ಆದರೆ ಅದರಲ್ಲಿರುವಷ್ಟು ಸರಳತೆ, ನಿರ್ಮಲ ಜೀವನದ ಒರತೆ ಯಾವ ಕಾವ್ಯದಲ್ಲೂ ಇರಲಾರದು. ಅದನ್ನು ರಚಿಸಿದವರು, ಸವಿವ ರಸಿಕರು—ಪಂಡಿತರಲ್ಲ; ಕೋವಿದರಲ್ಲ—ಮಹಾಮಹಾಕವಿಗಳಲ್ಲ. ಕಾಡಕೋಗಿಲೆಯಂತೆ ಯಾರ ಗೋಚರಕ್ಕೂ ಬಾರದ (ಇಂಚರವಷ್ಟೇ ಕೇಳಿಸುವುದು) ಹಳ್ಳಿಯ ಬಡ ಜನರು. ಅದರಲ್ಲೂ ನಿರಕ್ಷರಕುಕ್ಷಿಗಳಾದ ಹಳ್ಳಿಯ ಹೆಂಗುಸರು. ಕಲ್ಲುಮುಳ್ಳುಗಳ, ಕಸಕಡ್ಡಿಗಳ ನಡುವೆ ಬೆಳೆದುಬರುವ, ಹೊಳೆದು ಮೂಡುವ ಮಲ್ಲಿಕಾಸುಮದಂತಿದೆ ಅವರ ಸಾಹಿತ್ಯ—ಜಾನಪದ ಸಾಹಿತ್ಯ. ಇದು ಯಾರ ನೆರವಿಂದಲಾಗಲಿ ಶಿಫಾರಸಿನಿಂದಾಗಲೀ ಮೂಡಿಬಂದಿಲ್ಲ, ತನ್ನೊಳು ತಾನೇ ಸೂಸುವ ಅದಾವುದೋ ಸವಿರಸವೊಂದು ಇದರ ಪೋಷಕವಾಗಿದೆ. ಹೀಗೆ ಅರಳಿ, ಮಿನುಗುವ ಮಲ್ಲಿಗೆಯನ್ನು ಕೊಯ್ದು ಓರಣವಾಗಿ ನೇಯ್ದು, ಕನ್ನಡಾಂಬೆಯ ಮುಡಿಗೆ ತೊಡಿಸುವುದರಲ್ಲಿ ಹಳ್ಳಿ ಹೆಂಗುಸರು ಆತ್ಮಾನಂದವನ್ನು ಹೊಂದುತ್ತಾರೆ. ಅವರು ತಮ್ಮ ಯಾವುದೇ ಕೆಲಸವಿರಲಿ, ದುಡಿಮೆಯಿರಲಿ ಅವುಗಳೊಂದಿಗೆ ಈ ಕೆಲಸವನ್ನು ಮಾಡಿಸಿಯೇ ಮುಗಿಸುತ್ತಾರೆ. ಹಾಡಿ ನಗುತ್ತಾರೆ, ಆತ್ಮತೃಪ್ತಿಗೆ.

ಆದರೆ ಆದಕ್ಕೂ ಒಂದು ವೇಳೆ, ಸಂದರ್ಭ ಎಂಬುದಿದೆ. ರಾಗಿ ಬೀಸುವಾಗ, ಬತ್ತ ಕುಟ್ಟುವಾಗ ಹೀಗೆ ಮೈಮುರಿದು ದುಡಿಯುವಾಗ ಹಳ್ಳಿ ಹೆಂಗುಸರು ತಮ್ಮ ಕಷ್ಟ ಸಂಕಷ್ಟಗಳನ್ನೆಲ್ಲ ಹಾಡಿನ ಮೂಲಕ ಮರೆತು ತಮ್ಮ ಭಾರವಾದ ಹೃದಯವನ್ನು ಹಗುರಮಾಡಿಕೊಳ್ಳುತ್ತಾರೆ. ಇನ್ನು ಮಕ್ಕಳನ್ನು ತೊಟ್ಟಿಲಲ್ಲಿ ಮಲಗಿಸಿ ತೂಗುವಾಗ ಹೆಣ್ಣುಮಕ್ಕಳು ಹಾಡುತ್ತಾರೆ.

ಹೀಗೆ ವೈವಿುರಿತು ಹಾಡುವಾಗ ಅವರ ಪ್ರತಿ ನುಡಿಯುಲ್ಲೂ ಒಂದೊಂದು ತತ್ತ್ವದ ಕುಡಿ ಇದ್ದೇ ಇದೆ. ಚುಟುಕು ಮಾತಿನಲ್ಲಿ ಎಟಕದ ಅರ್ಥವನ್ನು ತುಂಬಿಸಿ ಬಿಡುತ್ತಾರೆ. ಒಂದೊಂದು ಹೊಸ ವಿಚಾರಕ್ಕೆ ಹೊಸ ಹೊಸ ಮತ್ತು ಚಿಕ್ಕ ತಕ್ಕ ಚೊಕ್ಕ ಉಪಮೆಗಳ ಸಮರ್ಥನೆಯಿರುವುದು. ಇವೆಲ್ಲವೂ ಸ್ವಾಭಾವಿಕವಾಗಿ ಬರುವಂತವುಗಳೇ. ಇದೇ ರೀತಿ ಮದುವೆ ಮುಂತಾದ ಮಂಗಳಕಾರ್ಯಗಳ ವೇಳೆ ಅವರು ತಮ್ಮ ಹಾಡಿನ ಹೊನಲಿನಲ್ಲಿ ಎಲ್ಲರನ್ನೂ ಮೀಯಿಸಿಬಿಡುತ್ತಾರೆ. ಈ ಹಾಡುಗಳಲ್ಲಿ ವ್ಯಂಗ್ಯ, ಚೇಷ್ಟೆ, ತಮಾಷೆಗಳು ತುಂಬಿದ್ದರೂ ಅವುಗಳ ಹಿನ್ನೆಲೆ ಸತ್ವಪೂರ್ಣವಾಗಿದೆ. ಪುರಾಣಯುಗದ ಪುಣ್ಯಪುರುಷರ ಕತೆಗಳನ್ನು ಹೊಂದಿಸಿಕೊಂಡು ಅದನ್ನು ತಮ್ಮ ಬಾಳ್ಗಡಲಿನಲ್ಲಿ ತೇಲಬಿಟ್ಟು ನಗೆಬಗೆಯ ತೆರೆತೆರೆಗಳ ಮೇಲೆ ನಲಿನಲಿದು ಆನಂದ ತೀರವನ್ನು ಸೇರುವರು.

ಇದಕ್ಕೊಂದು ಉದಾಹರಣೆಯಾಗಿ ವಧುವು ತನ್ನ ವರನ ಕೊರಳಿಗೆ ಹೂಮಾಲೆಯನ್ನು ಹಾಕುವಾಗ ಇತರ ಹೆಂಗುಸರು ಹೇಗೆ ಹಾಡುತ್ತಾರೆಂದು ವಿವೇಚಿಸಬಹುದು.

ಹಾಡು ಆರಂಭವಾಗುವ ಮೊದಲು ಇಷ್ಟದೇವತೆಗಳನ್ನು ನೆನೆದುಕೊಂಡು, ಹಾಡು ಮುಂದುವರಿಯುತ್ತದೆ.

"ಶ್ರೀಗುರು ಗಣಪರ ಶೀಘ್ರದಿ ನೆನೆಯುತ್ತ
ಯೋಗ ಮಹೇಶ್ವರಿಯೊಳು ಮತಿ ಬೇಡುತ್ತ
ನಾಗ ಕುಂಡಲನಿಗೆ ನಮಿಸಿ ಕೊಂಡಾಡುತ್ತ
ಈಗ ನಾನುಸುರುವೆನು—ಇಂದಿರೆಯು ಕೈಯ್ಯೊಳು
ಹೂಗಿನ ಮಾಲೆಯನು—ಹಿಡಿದು ನಸು ನಾಚುತ
ಬಾಗಿ ಲಜ್ಜಿಸುತ ತಾನು—ದೇವಾಸುರರನು
ಆಗಲೀಕ್ಷಿಸಿ ಮನೋಭಾವದಿ
ಆಗ ಕಂಡಳು ಬ್ರಹ್ಮರಂಗವ
ಈಗಲಿವಬಲು ವೃದ್ಧ ಶಿವಗೆಸ—
ರಾಗವಾಗದೆ "ನುತ್ತಲಿಂದ್ರನ
ಬಾಗಿ ನೋಡಿದಳೆ ಮನದಲ್ಲಿ ॥ ೧ ॥

ಪೂಜ್ಯಭಾವದಿಂದ ಬ್ರಹ್ಮನನ್ನು ಕಂಡು ಮತ್ತೆ ಇಂದ್ರನೆಡೆಗೆ ಈಕ್ಷಿಸುತ್ತಾ,

ಘನವಲ್ಲನಿವನೆಂದು ಘೂರ್ಣಗರ್ವಿತನೆಂದು
ಅಗ್ನಿಕಾಣುತಲೆಂದು ಲಗ್ನವಾಗದು ಎಂದು
ಧನಪತಿಯನು ಕಂಡಾಳೊ—ಧನಾಢ್ಯನ
ತನ ಹೆಮ್ಮೆ ಬೇಡೆಂದಳೊ—ಬಿಟ್ಟವನ
ಮುಂದಮುಂದಕೆ ಬಂದಳೊ—ನಿಂದಾಳೋ
ದಿನದಿನಕೆ ಕ್ಷೀಣತ್ವವೃದ್ಧಿಯು
ಇನ್ನೇಕೆ ಜ್ವಲಿಸುತಿಹ ಭಾರೀ
ಇನನ ಕಾಣುತ ಬೇಡೆಂದು
ಮೆಲ್ಲಡಿ ಇಡುತ ಮುಂದಕೆ ನಾರೀ
ಮಣಿ ಬಂದಾಳೊ ಒಲವಿಂದ ॥ ೨ ॥

ಹೀಗೆ ಇಂದ್ರಾಗ್ನಿ ಕುಬೇರ ಸೂರ್ಯಚಂದ್ರಾದಿಯನ್ನು ಬಿಟ್ಟು ಮತ್ತೆ

ಮಾರುತನ ಕಂಡು ಮನದಿ ನಿಶ್ಚಯಗೊಂಡು
ಸಾರಿ ತೆರಳಲೆಂದು ಸದರವಲ್ಲೆನಗೆಂದು
ಚೋರ ಇನ್ನಾರೆಂದಳೋ—ಈಶ್ವರ ಸಂ
ಹಾರ ಮೂರುತಿ ಎಂದಳೋ—ನಂಜುಂಡಕ
ಠೋರ ಮಾನಸನೆಂದಳೋ—ತಾನಾಗಿ ತನ್ನೊಳು
ದಾರಮಣಿ ಕೇಯೂರ ಕಂಕಣ
ದಾರ ಮುತ್ತಿನ ಪದಕ ಹೂಗಿನ
ಸರ ಡಾಬಿಲಿ ಪಟ್ಟೆಸೀರೆಯೊ
ಯ್ಯಾರ ಮಾಡುತ ನಾರಿ ನಡೆಯುತ
ಸಾರಿ ಸಾರಿಯಲಿ ಬರಲಿಂದು ॥ ೩ ॥

ಆ ಮೇಲೆ,

ಮಿಕ್ಕ ದಿಕ್ಪಾಲರ ಮಿಕ್ಕಗೀರ್ವಾಣರ
ಅಕ್ಕರದಲಿ ನೋಡಿ ನಮಿಸಲು ದಯಮಾಡಿ

ರಕ್ಕಸರ ಹಂತಿಯನು—ಲೆಕ್ಕಿಸದೆ ಮುನ್ನ
ಸಿಕ್ಕಿ ಪಾದಾಂಬುಜವನು—ಈತನಾರೆಂದು
ಚಕ್ರಪಾಣಿಯಿವ ತಾನು—ಈ ಮಹಿಮಗೆ
ತಕ್ಕ ವಧು ತನಗೊಪ್ಪು ಮೆಚ್ಚು
ಶಿವನಂಗದಲಿ ಎಂದೆಣಿಸಿನಸು
ನಕ್ಕು ನಾಚುತ ಉಂಗುಷ್ಟದಲಿ ನೆಲ
ಕಿಕ್ಕಿ ಕಣೆಗಣ್ಣಿನಲಿ ನೋಡಿದಳು
ರಕ್ಕಸವೈರಿಯನು ಮನದಲ್ಲಿ || ೪ ||

ಶ್ರೀಮನ್ನಾರಾಯಣನಲ್ಲಿ ಮನಸೋತು ಲಕ್ಷ್ಮಿಯು ಮತ್ತೂ ಅವನ ಕುರಿತು ಯೋಚಿಸುತ್ತಾಳೆ:

ಸರ್ವಲೋಕೇಶನು ಸರ್ವಶಂಖೇಶನು
ಸರ್ವರಿಗೊಡೆಯನು ಸರ್ವರ್ಥಕೊಡವನು
ಸರ್ವಂತರ್ಯಾಮಿ ತಾನು—ದೇವಾದಿದೇವ
ಸರ್ವಗುಣಸಂಪನ್ನನು—ಹಾಲ್ಗಡಲೊಳು
ಮೆರೆದು ಕೊಂಡವ ತಾನು—ಪೀತಾಂಬರ
ಧರಿಸಿ ಕೌಸ್ತುಭಹಾರ ಪೇರೂರ
ಎರಕವಾಗಿಹ ಮೆರೆವಲಂಕಾರ
ಬೆರಳಮಣಿ ಮುದ್ರಿಕೆಯ ಚೆನ್ನಿಗ
ಗರುಡಗಮನ ಮುಕುಂದಮುರಹರ
ನರಸಿಕ್ಕಿದಳು ಕೊರಳಿಂಗೆ || ೫ ||

ಲಕ್ಷ್ಮಿಯು ನಾರಾಯಣನ ಕೊರಳಿಗೆ ಹೂಮಾಲೆಯನ್ನು ಹಾಕುತ್ತಲೆ ಅವನೂ ಈ ರೀತಿ ಯೋಚಿಸುತ್ತಾನೆ:

"ಎನಗೆ ತಕ್ಕವಳೆಂದು ಎನಗೆ ವಲ್ಲಭೆ ಎಂದು
ಎನಗಾಗಿ ಇವಳಿಂದು ಜನನವಾಗಿಹಳೆಂದು"
ಮನದಿ ಶ್ರೀಹರಿ ತಾನು—ಆಲೋಚಿಸಿ
ವಿನಯದಿ ಕುಳಿಹನು................

ಆಗ ಲಕ್ಷ್ಮಿದೇವಿಯು ಯೋಚಿಸುತ್ತಾಳೆ:

……………ಈತನು ಬೇಡ
ವೆನುವದನುಚಿತವದನು—ಹೇಳುಬಾರದು
ಚಿನುಮಯನು ಇವ ಚೆಲುರೂಪನು
ಅನುಮಿತಾಮಿತ ಸುಪ್ರಕಾಶನು
ತನಗೆ ವಲ್ಲಭನೆಂದು ತ್ರಿಜಗ
ಜನನಿ ಹೂಮಾಲೆಯನು ಕೊರಳಿಂಗೆ
ವಿನಯನದಲಿ ಇಕ್ಕಿದಳು ನಸುನಾಚಿ ॥ ೬ ॥

ಆಗಲೇ,

ದೇವತೆಗಳು ಬಂದು ದೇವಾದುಂದುಬಿಗೊಂಡು
ಭಾವಿಸಿ ತೊಳಗಲು ಭಾರಿ ಸಂತಸಗೊಂಡು
ದೇವಾದಿ ದೇವ ತಾನು—ಪೊಗಳಿ ಲಕ್ಷ್ಮಿಮಿಯನು
ಸೌಮಂಗಲ್ಯ ಶೀವಿಯೇನು!—ಸಂಭ್ರಮಗಳನು
ಆವ ರೀತಿ ಬಣ್ಣಿಪೆನು—ಈ ಮಂಗಳವನು
ಆವ ಪರಿಭವ ವಿನಯನೆಂಬುವ
ದೇವ ಶ್ರೀ ಪಂಚಲಿಂಗೇಶನು
ದೇವಿಯನು ವಾಗ್ದೇವಿ ಬಲದಿಂ
ಡೇವಿ ನಾನಾಮಿತ ಪೊಗಳಿದ
ಈ ವಾರ್ತೆಯನು ಕೇಳೀ ಜನರೆಲ್ಲ ॥ ೭ ॥

ಈ ರೀತಿಯಲ್ಲಿ ವಧೂವರರನ್ನು ಲಕ್ಷ್ಮೀನಾರಾಯಣರಿಗೆ ಹೋಲಿಸುತ್ತಾ ಅವರು ಸೌಭಾಗ್ಯವಂತರೂ ಚಿರಂಜೀವಿಗಳೂ ಆಗಿ ಬಾಳಲೆಂದೇ ಅವರೆಲ್ಲರ ಆಶೆಯಾಗಿದೆ. ಹಾಡಿನ ಗೂಢಾರ್ಥವೂ ಇದೇ ಆಗಿದೆ. ಮೇಲಿಂದ ಮೇಲೆ ಓದುತ್ತಾ ಹೋದರೆ ಹಾಡಿನ ರಸಿಕತೆಯಷ್ಟೆ ಸಿಗುವುದು ವಿನಃ ರಹಸ್ಯದ ಅರಿವಾಗದು. ಅಂತೂ ಹಳ್ಳಿ ಹೆಂಗುಸರ ಇಂಥಾ ಸಾಹಿತ್ಯವು ಪಾಂಡಿತ್ಯದ ಸಾಹಿತ್ಯಕ್ಕೇನೂ ಬಿಟ್ಟಿಲ್ಲ. ರಸವತ್ತಾಗಿಯೂ ಅರ್ಥಗರ್ಭಿತವಾಗಿಯೂ ಇದೆ ಮದುವೆಯ ಹಾಡುಗಳೆಂದರೆ ಕೇವಲ ಹಾಸ್ಯ,

ವ್ಯಂಗಪ್ರಧಾನವಾಗಿಲ್ಲ. ಹಲವೆಡೆ ಹೃದ್ರಾವಕವಾಗುವಂತಹ ಸನ್ನಿವೇಶಗಳೂ ಇವೆ. ಮುಖ್ಯವಾಗಿ ಹೊತ್ತುಸಲಹಿದ ತಾಯಿಯು ತನ್ನ ಪ್ರೀತಿಯ ಮಗಳನ್ನು ಪರರ ವಶಕ್ಕೊಪ್ಪಿಸುವಾಗ ಅವಳನ್ನುವ ಮಾತು ಬಲು ಮಾರ್ಮಿಕವಾಗಿದೆ:

"ಉಂಬ ತೊತ್ತನು ಕೊಟ್ಟೆ ಉಂಬಲ್ಯೆಂಗೆಲೆ ಕೊಟ್ಟೆ
ಒಂಬತ್ತು ವರ್ಷ ಸಲಹಿದೆ—ಸಲಹಿ ಸಾಕಿದ-ಮಗಳ
ಇಂದು ನಿಮ್ಮ ಕೈಯ ಕೊಡುತೇನೆ ||

ಆಗ ಸಂತೈಸಲೋ ಎಂಬಂತೆ ವರನ ತಾಯಿಯು ಹೀಗೆ ನುಡಿಯುತ್ತಾಳೆ:

"ಕೊಟ್ಟರೇನಾಯಿತು ಅಟ್ಟಡಿಗೆ ಉಂಡಾಳು
ಪಟ್ಟೆ ಮಂಚದಲಿ ಕುಳಿತಾಳು—ಕುಳಿತಾಳು ನಿಮ್ಮ ಮಗಳು
ಇದ್ದರೆ ಸಾಕು ಮನೆಯಲ್ಲಿ"

ಹೀಗೆ ಹೃದಯದಲ್ಲಿ ತುಂಬಿದ ಆನಂದವಿರಲಿ, ನೋವಿರಲಿ ಹಾಡಿನ ಮೂಲಕ ಹೊರಬೀಳುವುದು. ಪೂರ್ವಕಾಲದಿಂದಲೂ ಹರಿದುಬರುತ್ತಿರುವ ಇಂಥ ಜಾನಪದ ಕಾವ್ಯವಾಹಿನಿಯು ನಮ್ಮ ಕನ್ನಡ ಸಾಹಿತ್ಯದ ಒಂದು ಸಂಪತ್ತೇ ಆಗಿದೆ. ಹೀಗಿರುವ ಜಾನಪದ ಸಾಹಿತ್ಯವನ್ನು ಊರ್ಜಿತಗೊಳಿಸಬೇಕು. ಅಲ್ಲಿ ಇಲ್ಲಿ ನಶಿಸಿಹೋಗುತ್ತಿರುವ ಹಳ್ಳಿಹಾಡುಗಳನ್ನು ಸಂಗ್ರಹಿಸಿ ಪ್ರಕಟಿಸಿ, ಪ್ರಚಾರಗೊಳಿಸಬೇಕು.

........

## ೨. ಹೆಣ್ಣು ಹೃದಯದ ಹಾಡು

ಸಾಹಿತ್ಯವು ಸಮಾಜಕ್ಕೊಂದು ಕನ್ನಡಿಯಿದ್ದಂತೆ ಎಂದಿದ್ದಾರೆ ಬಲ್ಲವರು. ಇದು ಎಲ್ಲರೂ ಒಪ್ಪತಕ್ಕ ಮಾತೇ. ಉತ್ತಮ ಸಾಹಿತ್ಯವು ಅನುಭವದ ಪಕ್ವತೆ ಹಾಗೂ ಪ್ರಾಮಾಣಿಕತೆಗಳಿಂದ ರಚಿಸಲ್ಪಡುವುದರಿಂದ ಅಲ್ಲಿ ಸಮಾಜದ ಪ್ರತಿಬಿಂಬವನ್ನು ಕಾಣಬಹುದಾಗಿದೆ. ಅಂತಹ ಉತ್ತಮ ಸಾಹಿತ್ಯದ ಸಾಲಿಗೆ ಜಾನಪದ ಸಾಹಿತ್ಯವೂ ಸೇರಿದೆ. ಇದರ ಕರ್ತೃಗಳು

ಹಳ್ಳಿಯ ಬಡಜೀವಿಗಳಾದುದರಿಂದ ಬಾಳಿನ ಸಹಜತೆ, ಸಂಪೂರ್ಣತೆ ಇಲ್ಲಿ ಎದ್ದುಮೂಡುತ್ತಿವೆ.

ಕನ್ನಡಿಯು ಸಿಂಗಾರ ಪ್ರಿಯರಾದಸ್ತ್ರೀಯರ ಗಂಟು ಹೇಗೋ ಹಾಗೆಯೇ ಜಾನಪದ ಸಾಹಿತ್ಯವು ರಸಿಕ ಕವಿಗಳಾದ ಅವರ ಸ್ವತ್ತೇ ಆಗಿದೆ. ಇದರಿಂದ ಸ್ವತಃ ಹೆಂಗುಸರೇ ಜಾನಪದ ಸಾಹಿತ್ಯದ ರಚಯಿತರಾಗಿ, ಅವರ ಬಾಳಿನ ಸುಖ, ದುಃಖ, ಆಶೆ ಆಕಾಂಕ್ಷೆಗಳೇ ಇಲ್ಲಿ ಒಡಮೂಡುತ್ತಿವೆ. ಹೆಣ್ಣು ಹೃದಯವು ಎಂದೂ ತೃಪ್ತವಲ್ಲ; ಆಗ ಇಂಥ ಸಾಹಿತ್ಯವು ಅಲ್ಲಿ ಭರ್ತಿಯಾಗಲು ತುಂಬಿ ಹರಿಯುತ್ತಿದೆ. ಹದಗೊಂಡು ಉತ್ತಮ ಸಾಹಿತ್ಯ ವಾಗಿ ಹೊರಗೆ ಬರುತ್ತದೆ.

ಹೆಣ್ಣು ಮದುವೆಯಾಗಿ ಗಂಡನ ಮನೆ ಸೇರುತ್ತಾಳೆ. ಅಲ್ಲಿ ಎಲ್ಲರೂ ಅಪರಿಚಿತರೇ. ತಾನು ಪರದೇಶಕ್ಕೆ ಬಂದೆನೋ ಎಂದೆಣಿಸಿಕೊಳ್ಳುತ್ತಾಳೆ. ತೌರನ್ನೇ ನೆನಸಿಕೊಂಡು ಆತ್ಮತೃಪ್ತಿಗಾಗಿ ಹೇಳುತ್ತಾಳೆ:

"ಬಂಧುಗಳಿದ್ದರೆ ಬಂದೆನ್ನ ಕಾಣರೋ"
ಬಂದುಗಳಿಲ್ಲೆ ಪರದೇಶದಲಾನಿದ್ದೆ
ಬಂದು ಕಂಡವರು ಒಡಹುಟ್ಟು ‖ ೧ ‖

ಗಂಡನ ಮನೆಯಲ್ಲೇ ತಾನು ಮುಂದೆ ಇರಬೇಕಾಗಿದೆ. ಆದರೆ,

ಅತ್ತಿಗೆ ತಾಯಲ್ಲ, ಹಿತ್ತಾಳೆ ಚಿನ್ನಲ್ಲ
ಮತ್ತೆ ಬಂದಣಿಕ ಮರವಲ್ಲ, ಹೆಣ್ಮಕ್ಕ್ಳೀಗೆ
ಹುಟ್ಟಿದ ಮನೆಯು ನಿಜವಲ್ಲ ‖ ೨ ‖

ಎನ್ನುತ್ತಾ ತನ್ನ ಹೆಣ್ಣುಹೃದಯವನ್ನು ಇಲ್ಲಿ ಬಿಚ್ಚಿ ತೋರಿಸುತ್ತಾಳೆ. ಅಂತಹ ಹೆಣ್ಣಿಗೆ ತಾಯಂತೂ ಇಲ್ಲವಾದರೆ ಇನ್ನೊಂದು ವಿಧವಾಗಿ ಸಮಾಧಾನವನ್ನು ತಂದುಕೊಳ್ಳುತ್ತಾಳೆ:

ತಾಯಿಲ್ಲದ ತವರಿಗೆ ಹೋಗಿಬರುವುದು ಕಷ್ಟ
ನೀರಿಲ್ಲದ ಕೆರೆಗೆ ಪಶು ಹೋಗಿ ಬಪ್ಹಾಂಗೆ
ನಾಹೋಗಿ ಬಪ್ಪೆ ತವರಿಂಗೆ ‖ ೩ ‖

ತಾಯಿಯಿಲ್ಲದ ಮನೆಯು ಬತ್ತಿದ ಕೆರೆಯಂತೆ ಎನ್ನುವ ಮಾತು ಎಷ್ಟು ಯುಕ್ತವಾದುದು ಎಂದು ನಾವೇ ಊಹಿಸಬಹುದು. ಅಲ್ಲಿ ಅತ್ತಿಗೆ

ಇವ್ದಾಳೆ; ಆದರೆ ಏನು ಪ್ರಯೋಜನ? ಎಂದು ಕೊರಗಿಕೊಳ್ಳುತ್ತಾಳೆ. ಆದರೆ ಅಣ್ಣನೊಬ್ಬನಿದ್ದಾನೆ. ಅವನ ನೆನಪು ಬಂದಾಗ,

"ನಮ್ಮಣ್ಣನಾದರೆ ನಮಗೆ ಬಣ್ಣವ ತಕ್ಕು
ನಮ್ಮಣ್ಣನಲ್ಲ ಪರರಣ್ಣ, ಪರರಿಂಗೆ
ತಕ್ಕು ಒಪ್ಪುವ ಹೊಸಬಣ್ಣ || ೪ ||

—ಹೀಗೆ ಅಣ್ಣನ ಉಪಕಾರವನ್ನು ನೆನೆದುಕೊಳ್ಳುತ್ತಾಳೆ. ಇದರಿಂದ ಅವಳು ಯಾವಾಗಲೂ ಅಣ್ಣನಿಗೆ ಆಭಾರಿಯಾಗಿಯೇ ಇರುತ್ತಾಳೆ. ಅವ ನೆಲ್ಲಿಗಾದರೂ ಹೊರಹೋಗಿದ್ದರೆ, ಅವನ ದಾರಿಯನ್ನೇ ಕಾಯುತ್ತಿರುತ್ತಾಳೆ. ದೂರದಲ್ಲಿ ಅಣ್ಣನ ಬರವನ್ನು ಕಂಡು,

ನಮ್ಮೂರ ಬೈಲಲ್ಲಿ ಹನ್ನೆರಡು ಕೊಡೆಕಂಡೆ
ನಮ್ಮಣ್ಣನಪ್ಪುಬರುವುದು, ಅತ್ತಿಗೆ
ಸಣ್ಣಕ್ಕಿ ಎಸರ ಇಡು ಬೇಗ || ೫ ||

—ಎನ್ನುತ್ತಾಳೆ, ತನ್ನ ಅತ್ತಿಗೆಯೊಡನೆ. ಇವೆಲ್ಲವೂ ಹೆಣ್ಣಿನ ಹೃದಯ ದಲ್ಲಿ ಉಕ್ಕಿಬಂದ ಮಾತುಗಳೇ.

ಈ ಎಲ್ಲಾ ಹಾಡುಗಳನ್ನು ಹೆಣ್ಣು ಯಾವಾಗ ಹಾಡುತ್ತಿರುತ್ತಾಳೆ ಎಂಬ ವಿಚಾರ. ಅದಕ್ಕೂ ಒಂದು ವೇಳೆ ಇದೆ. ಮುಖ್ಯವಾಗಿ ಈ ಹಾಡು ಗಳನ್ನು ತಮ್ಮ ಮಕ್ಕಳನ್ನು ಆಡಿಸುವಾಗ ಹಾಡುವುದು ರೂಢಿಯಾಗಿದೆ.

ಹೆಣ್ಣು ತನ್ನ ಗಂಡನ ಮನೆಯನ್ನು ಸೇರಿ, ನಿತ್ಯವೂ ತವರನ್ನೇ ನೆನೆಸಿಕೊಳ್ಳುತ್ತಾ ಕೊನೆಗಂತೂ ಅಲ್ಲಿಗೆ ಹೊಂದಿಕೆಯಾಗುತ್ತಾಳೆ. ಆತ್ಮ ತೃಪ್ತಿಯನ್ನು ಹೊಂದುತ್ತಾಳೆ. ಅಷ್ಟರಲ್ಲೆ ಅವಳಿಗೆ ಮಕ್ಕಳಾಸೆ ಹೆಚ್ಚು ವುದು. ಹಲಕಾಲದ ತನಕ ಮಕ್ಕಳಾಗದೆ ಹೋದರೆ ಅವಳ ವ್ಯಥೆ ಹೇಳತೀರದು. ತನಗೇಕೆ ದೇವರು ಮಕ್ಕಳನ್ನು ಕೊಡಲಾರನೆಂದು ಕೊರಗಿಕೊಳ್ಳುತ್ತಾಳೆ.

ಮಕ್ಕಳರ್ಥಿ ಉಳ್ಳವಂಗೆ ಮಕ್ಕಳ ಕೊಡ ಸ್ವಾಮಿ
ಮಕ್ಕೊ ಬೇಡೆಂದು ತಿರಿದುಂಬ ಬಡವಂಗೆ
ಮಕ್ಕಳ ಕೊಡುಗು ಮನೆತುಂಬ || ೬ ||

ಅಂತೂ ಕೊರಗಿ, ಸೊರಗಿ ಒಂದು ಮಗುವಾಯಿತು ಎನ್ನಿ; ಮತ್ತೆ ಆ ತಾಯಿಯ ಹೆಮ್ಮೆಯೋ ಹೆಮ್ಮೆ. ಏನೇನೋ ಹೇಳಿಬಿಡುತ್ತಾಳೆ.

ಮುದ್ದು ಬಾಯಿಗೆ ಸೇರ ಬುದ್ಧಿ ಕಿವಿಗ್ಹೋಗ
ಮುದ್ದು ಬಾಲಂಗೆ ಇದು ಶೀಲ, ನಿನ್ನಂಥ
ಮಕ್ಕಳು ಬೇಕೊ ಮನೆತುಂಬ ॥ ೭ ॥

ಅಂದರೆ ತಾಯಿ ತನ್ನ ಮಗನು ತುಂಬ ಗಟ್ಟಿಗನು ಎಂದು ಎಣಿಸಿಕೊಳ್ಳುತ್ತಾಳೋ ಏನೋ ಅಂಥ ಗಟ್ಟಿಗರನ್ನೇ ಅವಳು ಅಪೇಕ್ಷಿಸುತ್ತಾಳೆ. ಆ ಮಗು ಕೂಗುವಾಗ ಅವಳಿಗೆ ತುಂಬ ಮರುಕವಾಗುತ್ತದೆ. ಎತ್ತಿ ಆಡಿಸುತ್ತಾಳೆ; ತೊಟ್ಟಿಲಲ್ಲಿ ಮಲಗಿಸಿ ತೂಗುತ್ತಾಳೆ. ಮಗು ಮಲಗಿ ನಿದ್ದೆ ಹೋಗಲಿ ಎಂದು ಹಾಡುತ್ತಾಳೆ.

ಮುದ್ದು ನೀನಳದಿರ, ಎದ್ದಾಗ ಹಾಲುಣ್ಣು
ನಿದ್ದೆ ಬಂದಾಗ ಪವಡಿಸು, ಬಾಲಾ ನೀ
ಬುದ್ಧಿ ಬಂದಾಗ ಹರಿದಾಡು ॥ ೮ ॥

ಹರಿದಾಡಿ ಬಪ್ಪಾಗ ಹರಿಯು ಬ್ರಹ್ಮರು ಕಾಯ್ದು
ಹರಿದಾಡಿ ಜಿಗುಲಿಲಿ ಇಳಿವಾಗ ಕಿರಿಯುನಾ
ಮನೆದೇವರೇ ಕಾಯ್ಗನುದಿನ ॥ ೯ ॥

ಇಲ್ಲಿಲ್ಲೆ ಮಕ್ಕೋಗೆ ಹಲ್ಲೆಲ್ಲ ಬಪ್ಪಾಗ
ಎಲ್ಲಿಯೂ ಕಾಣೆ ಎಳೆಬೊಂಡ, ಇವನಜ್ಜ
ಕಲ್ಲೊಡೆದು ತೆಂಗ ನೆಡುಸಿಕ್ಕು ॥ ೧೦ ॥

—ಎನ್ನುತ್ತಾ ಮಗುವನ್ನು ಸಂತೈಸುತ್ತಾಳೆ. ಆ ತಾಯಿಗೆ ತನಗೊಬ್ಬ ಮಗನಿದ್ದಾನೆ ಎಂಬ ಹೆಮ್ಮೆ; ಆದರಿಂದ ಅವಳು ಉಬ್ಬುತ್ತಾಳೆ. ಎಷ್ಟೊ ವರ್ಷಗಳಿಂದ ಹರಕೆ, ಹಾರೈಕೆಗಳಿಂದ ಹುಟ್ಟಿದ ಮಗು; ಅವನು ಬೆಳೆದು ದೊಡ್ಡವನಾಗುವ ಕನಸುಕಟ್ಟಿ ಹಿಗ್ಗುತ್ತಾಳೆ. ಈ ಕನಸು ನೆನಸುಗಳು ಮಗುವನ್ನು ಆಡಿಸುವಾಗ, ತೂಗಿ ಸಂತೈಸುವಾಗ ಹಾಡಿನ ರೂಪದಲ್ಲಿ ಹೊರಬರುತ್ತವೆ. ತನ್ನ ಜೀವನದ ಸಿಹಿಕಹಿಗಳೊಂದೊಂದೇ ಅಲ್ಲಿ ವ್ಯಕ್ತವಾಗುತ್ತವೆ. ಮತ್ತೂ ಕೂಡಾ ಮಗು ಅಳುವನ್ನು ನಿಲ್ಲಿಸದಿದ್ದರೆ,

ಕೂಗುವ ಮಕ್ಕಳ ಅರಸ ಕೊಂಡೋಡಿಕ್ಕು
ಅರಸುತ್ತ ಬಕ್ಕು ನಿನ್ನ ಮಾವ, ತಿಳಿದಾರೆ
ಆರಸನ ಘಾಢ ಅಳುಶುಗು ॥ ೧೧ ॥

ಎಂದು ಹೆದರಿಸುತ್ತಾಳೆ. ಆದರೆ ಈ ಹೆದರಿಸುವಿಕೆಯಲ್ಲಿಯೂ ಒಂದು ತರದ ವೈಶಿಷ್ಟ್ಯವಿದೆ ಎನ್ನಬೇಕು. ಕೂಗುವ ಮಕ್ಕಳನ್ನು ಕಳ್ಳರಾಗಲೀ, ಗುಮ್ಮನಾಗಲೀ ಕೊಂಡು ಹೋದಾರು ಎನ್ನುವುದಿಲ್ಲ. ಹೆಮ್ಮೆಯಿಂದ ಅರಸನೇ ಸ್ವತಃ ಕೊಂಡುಹೋದಾನು ಎನ್ನುತ್ತಾಳೆ. ತನ್ನ ಮಗನು ಅರಸನಾಗಲು ಯೋಗ್ಯನು ಎಂದೇ ಅವಳ ಆಶೆ. ಆದರೆ ಪುಟ್ಟ ಮಗುವನ್ನು ಹೆದರಿಸುವುದಕ್ಕೂ ಅವಳಿಗೆ ಇಚ್ಛೆ ಇಲ್ಲ. ಕೂಡಲೇ ಅರಸನ ಗರ್ವವನ್ನು ಅಳಿಸಿ ಮಾವನು ಹಿಂದೆ ಕರೆದು ತಂದಾನು ಎಂದು ಸಂತೈಸಿ ನುಡಿಯುತ್ತಾಳೆ.

ಆ ತಾಯಿಯು ತನ್ನ ಮಗುವನ್ನು ಬುದ್ಧಿವಂತನಾಗಿ ಬಾಳಬೇಕೆಂದು ಆಶಿಸುತ್ತಾಳೆ. ಅವನೆಂದೂ ಆಲಸಿಯಾಗಿ ತಿರುಗಬಾರದು. ತಿಳಿಗೇಡಿಯಾಗಿ, ಇಲ್ಲವೆ ಕೆಟ್ಟವನಾಗಿ ಇರಬಾರದು ಎಂದು ಹಾರೈಸುತ್ತಾಳೆ. ಇದಕ್ಕಾಗಿ ಅವಳು ಮಗುವಿಗೆ ನೀತಿಪಾಠ ಕಲಿಸುತ್ತಾಳೆ.

ಆಡಿ ಉಂಡವ ಕೆಟ್ಟ ಕೇಡು ನೆನೆದವ ಕೆಟ್ಟ
ನೋಡದ್ದೆ ಕೆಟ್ಟ ಬೆಳೆಭೂಮಿ, ಸೋದರರ
ಹೆಣ್ಣುತಂದು ಕೆಟ್ಟ ಅತಿ ಹೆಡ್ಡ ॥ ೧೨ ॥

ಅಬ್ಬೆಗೆ ಬಡಿದವನ ಗುಬ್ಬಿಗೂಡೆಳೆದವನ
ಹಬ್ಬದಿ ಪಶುವ ಬಡಿದವನ ಪಾಪಿಯಾ
ಅಂತವನ ದೋಷ ತನಗೆಂದು ॥ ೧೩ ॥

ಹೀಗೆ ತಾಯಿಯು ತನ್ನ ಮಗುವನ್ನು ಲಾಲಿಸಿ ಪಾಲಿಸುತ್ತಾಳೆ. ಬುದ್ಧಿ ಕಲಿಸುತ್ತಾಳೆ. ಹೆಚ್ಚಾಗಿ ಈ ಹಾಡುಗಳನ್ನು ತೊಟ್ಟಿಲು ತೂಗುವಾಗ ಹಾಡುವುದನ್ನು ನಾವೆಲ್ಲೆಲ್ಲ ಕೇಳಬಹುದಾಗಿತ್ತು. ಕೇವಲ ಮೂರು ಪಂಕ್ತಿಗಳ ಮಾತಿನಲ್ಲಿ ನೂರು ವರ್ಷಗಳಷ್ಟು ಅನುಭವವನ್ನು ಸಾರಿಬಿಡುತ್ತಾಳೆ. ಜೀವನಕ್ಕೆ ಸಾಹಿತ್ಯದ ಒಂದು ಕೈಕನ್ನಡಿಯನ್ನು ಹಿಡಿಯುತ್ತಾಳೆ.

ಆದರೆ ಇದು ಹಿಂದಿನ ಕಾಲದ ಮಾತು. ಇಂಥಾ ನುಡಿಮುತ್ತುಗಳನ್ನು ತಮ್ಮ ಮುದ್ದು ಮಕ್ಕಳಿಗೆ ತೊಡಿಸಿ ಪೋಷಿಸುವ ಕ್ರಮ ಇಂದು ಮಾಯವಾಗಿದೆ. ಇಂತಹ ಸಾಹಿತ್ಯಕನ್ನಡಿಯನ್ನು ಮಕ್ಕಳ ಮುಂದಿಟ್ಟು ಅವರನ್ನು ತಿದ್ದುವ ಪರಿಪಾಟೀ ಇಂದು ಇಲ್ಲವಾಗಿದೆ. ಅದರ ಬದಲು ಆ ಪವಿತ್ರ ಕನ್ನಡಿಯನ್ನು ದೂರಕ್ಕೆಸೆದು ಚೂರು ಚೂರು ಮಾಡಿಬಿಟ್ಟಿದ್ದಾರೆ. ಆ ಚೂರುಗಳಲ್ಲಿ ಕೆಲವು ಮಾತ್ರ ಇಂದು ಸಿಗುತ್ತವಷ್ಟೆ! ಆದರೂ ಅವುಗಳು ತಮ್ಮ ಸಮಾಜ ಪ್ರತಿಬಿಂಬಕ ಶಕ್ತಿಯನ್ನು ಕಳೆದುಕೊಂಡಿಲ್ಲ. ಆದರೆ ಅದರ ಪ್ರಯೋಜನವನ್ನು ಯಾರೂ ಆಶಿಸುತ್ತಿಲ್ಲ! ಹೀಗಾಗಕೂಡದು. ಇದರಿಂದ ಕನ್ನಡ ಸಾಹಿತ್ಯಕ್ಕೆ ಅಪಾರ ನಷ್ಟವಿದೆ. ಆ ನಷ್ಟ ಭರ್ತಿಮಾಡುವುದಕ್ಕೆ ಎಲ್ಲರೂ ಮುಂದೆ ಬರಬೇಕಾಗಿದೆ. ಚೂರು ಚೂರಾಗಿ ಹೋದ ನಮ್ಮ ಜಾನಪದ ಸಾಹಿತ್ಯವನ್ನು ಎಲ್ಲರೂ ಹುಡುಕಿ ಸಂಗ್ರಹಿಸಿಬೇಕಾಗಿದೆ. ಕನ್ನಡದ ಹಳೆಯ ಹಿರಿಮೆಯನ್ನು ಎತ್ತಿತೋರಿಸಬೇಕಾಗಿದೆ.

▪▪▪▪▪▪▪▪

## ೩. ಸುಗ್ಗಿಯ ಹಾಡು.

ಉತ್ತಮ ಕಾವ್ಯನಿರ್ಮಾಣಕ್ಕೆ ಒಂದು ಪ್ರೇರಕ ಶಕ್ತಿ ಬೇಕು; ಭಾಷೆ, ಭಾವ, ಅನುಭವ, ಆದರ್ಶಗಳು ಆದರ ಹಿನ್ನೆಲೆಯಾಗಿರಬೇಕು ಎಂಬುದನ್ನು ಆದಿ ಕವಿ ವಾಲ್ಮೀಕಿಯಿಂದ ಹಿಡಿದು ಆಧುನಿಕ ಕವಿ ಕುವೆಂಪು ತನಕ ಕಾಣುತ್ತೇವೆ. ಮೊದಲಾಗಿ ಭಾಷೆಯನ್ನು ಹಿಡಿತದಲ್ಲಿಟ್ಟುಕೊಂಡು ತರುವಾಯ ಮನಸ್ಸಿನೊಳಗೆ ಭಾವನೆ, ಅನುಭವ ಆದರ್ಶಗಳ ಒತ್ತಡವನ್ನು ಹೆಚ್ಚಿಸಿಕೊಳ್ಳಬೇಕು. ಅವು ಏನಾದರೊಂದು ಅಪೂರ್ವ ಘಟನೆಯಿಂದ ಪ್ರಚೋದಿತವಾದಾಗ ಕಾವ್ಯರಸವು ಹರಿಯುವುದು. ಕೆರೆತೊರೆಸಾಗರಗಳಿಂದ ಹೀರಲ್ಪಟ್ಟ ನೀರು ಅನಂತಾಕಾಶದಲ್ಲಿ ಮುಗಿಲಾಗಿ ತುಂಬಿ ಕವಿದಾಗ ತಂಗಾಳಿಯು ಸೋಂಕಿದಂತೆ ಮಳೆಯಾಗಿ ಸುರಿಯುವುದು. ಇದನ್ನೇ ಜಾನಪದ ಕಾವ್ಯಕ್ಕೂ ಅನ್ವಯಿಸಿಕೊಳ್ಳಬಹುದಾಗಿದೆ.

ಮಾತಿನ ಮಲ್ಲಿಯರಾದ ಹೆಂಗಸರಿಗೆ ಜೀವನದ ಅಪಾರ ಅನುಭವವೂ ಇದ್ದೇ ಇದೆ. ಮಾತು ಮಾತಿಗೆ ತಾರ್ಕಣಿ ಹೂಡಿ ಹಾಡುವು

ದಂತೂ ಅವರ ಧರ್ಮ. ಅಂಥವರಿಂದ ಕಾವ್ಯ ತೊರೆ ಉಕ್ಕಿ ಹರಿಯ ಬೇಕಾದರೆ ಮತ್ತೆ ಬೇಕಾಗುವುದು ಒಂದು ಪ್ರೇರಕ ಶಕ್ತಿ. ಜೀವನದಲ್ಲಿ ಅದಕ್ಕೂ ಕೊರತೆಯಿದೆಯೇ? ಹೆಂಗುಸರ ಮೃದುಹೃದಯಕ್ಕೆ, ಅತೃಪ್ತಿಯ ಆಗರಕ್ಕೆ ವಿಶೇಷ ಘಟನೆಗಳೆಲ್ಲವೂ ಪ್ರಚೋದಕಗಳೇ ಆಗಿವೆ. ಮದು ಮಗಳು ವರನ ಕೊರಳಿಗೆ ಹೂಮಾಲೆಯನ್ನು ಹಾಕುವುದನ್ನು ಕಂಡಾಗ ಹೆಣ್ಣಿನ ಪ್ರಶಾಂತ ಮನಸ್ಸಿನ ತಿಳಿಗೊಳದಲ್ಲಿ ಹೃತ್ಕಮಲವು ಅರಳುತ್ತದೆ; ಹೊಸಜಗತ್ತನ್ನು ಕಾಣುತ್ತದೆ. ಮುದ್ದು ಮಗುವಿನ ನಗುಮೊಗವನ್ನು ನೋಡಿದಾಗ ಅವಳ ಹೃದಯದಲ್ಲಿ ಆನಂದವು ಉಕ್ಕಿ ಬರುತ್ತದೆ; ಹಿಂದು ಮುಂದಿನ ಬಯಕೆಯ ಬಾಳಿನೊರತೆಯನ್ನು ಕೂಡಿ ಹರಿಯುತ್ತದೆ. ಹಾಗೆಯೆ ಸುಗ್ಗಿಯ ಕಾಲ ಬರಲು ಅವಳ ಹೃದಯವು ಹಿಗ್ಗಿ ಹಾಡಿ ಹೇಗೆ ತಣಿಯುತ್ತದೆ ಎಂದು ತಿಳಿಯುವಾ.

ಬಾಗಿಲ ಮುಂದಣ ಗೆದ್ದೆ ಕದಿರು ಬಂದು
ಬಾಗಿತ್ತು ಅಂಚಂಚು ಗಿಳಿಮೇಗು, ಅಣ್ಣಯ್ಯ
ಮಂಚದಿಂದೆದ್ದು ಓಡ್ಸೂಗೂ ॥ ೧ ॥

ಮನೆಯ ಮುಂದಿನ ವಿಶಾಲವಾದ ಬಯಲಲ್ಲಿ ಅಂಚು ಅಂಚಾಗಿರುವ ಗದ್ದೆಗಳಲ್ಲಿ ತೆನೆಬಿಟ್ಟ ಪೈರೆಲ್ಲ ಅಂದವಾಗಿ ಕಾಣುತ್ತದೆ. ತೆನೆತುಂಬಿದ ಬತ್ತದ ಕಾಳುಗಳನ್ನು ಮೇದುತಿನ್ನಲು ಹಿಂಡುಹಿಂಡಾಗಿ ಗಿಳಿಗಳು ಹಾರಿ ಬರುತ್ತಿವೆ. ಅವನ್ನು ಅಣ್ಣನೇ ಸ್ವತಃ ಓಡಿಸಿಬಿಡುತ್ತಾನೆ. ಹೀಗೆ ಹಾಡು ಆರಂಭವಾಗುತ್ತದೆ.

ಮೂಡಲ ಮುಗಿಲೆದ್ದು ಮುನ್ನೂರು ಹನಿಬಿದ್ದು
ನಮ್ಮೂರ ಪೈರು ಆಗೆಯೆದ್ದು, ನಮ್ಮಣ್ಣಯ್ಯ
ಬಂದು ಬಿತ್ತಿ ಬೆಳೆಯಾಯ್ತು ॥ ೨ ॥

ಅಣ್ಣನು ಹೊಲದಲ್ಲಿ ಬೆವರಿಳಿಸಿ ಬೆಳೆಸಿದ ಪೈರು ತೆನೆಬಿಡುತ್ತಾ ಬಂದಿದೆ. ಈ ಸಮಯದಲ್ಲಿ ಮುಂಗಾರಿನ ರಭಸ ಕಮ್ಮಿಯಾಗಿ, ಹಿಂಗಾರು ಹನಿಹನಿಯಾಗಿ ಸುರಿಯಲು ಆರಂಭವಾಗುತ್ತದೆ. ಆ ವೇಳೆ ಹೊಲಗದ್ದೆ ಗಳ ಮೇಲೆ,

ತೆಂಕಲೆಲರು ಬೀಸಿ ತೊನ್ನೂರು ಹನಿಸೂಸಿ
ತೊಂಡಿಲ ಕದಿರು ತೆನೆಹಾಸಿ, ಹಾರೈಸಿ
ತಂಗಾಳಿ ನೆಲಕೆ ನಿಮಿರಿತ್ತು ‖ ೩ ‖

ಆಗಲೇ ತಂಗಿಗೆ ತನ್ನಣ್ಣನ ಸಿರಿತನದ ಹಿರಿಮೆಯು ನೆನಪಾಗುತ್ತದೆ.

ಬೆಟ್ಟುಗೆದ್ದಗೊನೂರು, ಬೈಲುಗೆದ್ದಗೊನೂರು
ಎತ್ತುಗೊಸೂರು ನೊಗನೂರು, ಅಣ್ಣಯ್ಯನ
ಸಿರಿಯೊಕ್ಕಲಕ್ಕೆ ಕಳೆಯೇರೆ ‖ ೪ ‖

ಅಂಥಾ ಅಣ್ಣನೇನು ಸಾಮಾನ್ಯನೇ?

ಪಟ್ಟೆ ಸಾಲೆಯನಾಂತ ಗಟ್ಟಿ ಮುರುವನಟ್ಟ
ಕಣ್ಣಿ ಮುಟ್ಟಾಳೆ ತಲೆಗಿಟ್ಟ, ಬಳೆತೊಟ್ಟ
ಹೊಂಗದಿರಕಳಕೆ ನಡೆಗೊಂಡ ‖ ೫ ‖

ಅಲ್ಲದೆ,

ಬಣ್ಣ ಹಚ್ಚಡಹೊದೆದ ರನ್ನ ಕೊಡಂಗೆಯನೇಲ
ಚಿನ್ನದುಂಗುರುವ ಬೆರಳಿಟ್ಟ, ಹೂಗ್ನೂಡಿ
ಬೆಳ್ಳಿಪಲುಗತ್ತಿ ಹಿಡುಕೊಂಡ ‖ ೬ ‖

ಮುತ್ತಿನೊಂಟಿಯನಿಟ್ಟ ಮುತ್ತು ಹಾರವತೊಟ್ಟ
ಮುತ್ತು ರುಮಾಲು ತಲೆಗಿಟ್ಟ, ನಮ್ಮಣ್ಣಯ್ಯ
ಮುತ್ತಿನಂತ ಕದಿರ ತರಲ್ಹೋದ ‖ ೭ ‖

ಹೀಗೆ ತನ್ನಣ್ಣನು ಗದ್ದೆಯಲ್ಲಿ ಬೆಳೆದ ಹೊಂಗದಿರನ್ನು ಕ್ಕೊಯ್ದು ತರುವುದಕ್ಕಾಗಿ, ಸಿದ್ಧನಾಗಿ ಹೊರಟ ವರ್ಣನೆಯನ್ನು ತಂಗಿ ಮಾಡುತ್ತಾಳೆ.

ಕೊಯ್ಲುಕಾಲ ಬರುವುದಕ್ಕೆ ಕೆಲವು ದಿನಗಳ ಮೊದಲು ಕದಿರು ಕೊಯ್ದು ಮನೆಗೆ ತಂದು ತುಂಬಿಸುವುದು ಹಳ್ಳಿಯ ರೈತರಿಗೆ ಒಂದು ಹಬ್ಬವಾಗಿದೆ. ಇದನ್ನು "ಕದಿರಮ್ಮನನ್ನು ಕರೆತರುವುದು" ಅಥವಾ "ಮನೆ

ತುಂಬುವುದು" ಎಂದು ಕರೆಯುತ್ತಾರೆ. ಒಂದುದಿನ ಶುಭಮುಹೂರ್ತದಲ್ಲಿ ಇದನ್ನಾಚರಿಸುತ್ತಾರೆ. ಹೆಚ್ಚಾಗಿ ಅಣ್ಣಂದಿರೇ ಇದನ್ನು ಪೂರೈಸುತ್ತಾರೆ. ಅಣ್ಣನು ಬೆಳಗೆ ಎದ್ದು ತಣ್ಣೀರಿನಲ್ಲಿ ಮಿಂದು ಮಡಿಯಾಗಿ, ಕೈಯಲ್ಲಿ ಬೆಳ್ಳಿಯ ಕುಡುಗೋಲನ್ನು ಹಿಡಿದುಕೊಂಡು ಶಂಖಜಾಗಟೆ ಘೋಷದೊಂದಿಗೆ ಗದ್ದೆಯ ಕಡೆಗೆ, ಮುತ್ತಿನಂತಹ ಕದಿರು ಕೊಯ್ಯುವುದಕ್ಕೆ ಬರುತ್ತಾನೆ.

ಆ ಮೇಲೆ ಅಣ್ಣನು ಮಾಡುವ ಕೆಲಸಗಳನ್ನೆಲ್ಲ ರಾಗವಾಗಿ ತಂಗಿಯರು ಹಾಡುವುದು ಹಳ್ಳಿಗರ ಪದ್ಧತಿಯಾಗಿದೆ. ▪ ಹಾಡು ಹೀಗಿದೆ:

ಶ್ರೀಗುರುವರನಡಿಗೆರಗುತಮಂಗಲೆ
ವಾಗ್ಯಲಂಕಾರವ ಗೈದು.
ಹೂಗುಸುಮಂಗಲೆ ಸಾಕೊಂಡ್ಯೆದು ಸ-
ರಾಗದಿ ರವಿಯ ಪೂಜಿಸುತೊಲಿದೂ
ಬೇಗದಿ ಬತ್ತದ ಕದಿರನೆಳೆದೂ
ಬಾಗಿಪೂಜಿಸಿ ದೇವಾರ ಧರೆಯೊಳ-
ಗಾಗೀ ಧರಿಸುತ್ತ ಬರಲಂದು ॥ ೮ ॥
ಬರುತಲಿ ಕ್ಷೀರವ ಪ್ರೋಕ್ಷಿಸಿ ಅರಳನು
ಸುರಿಯುತ ದುಂದುಬಿಗೋಶದಲಿ
ತರತರದಿಂದಲಿ ಲಕ್ಷ್ಮಿಮಿಸುಮಂಗಲೆ
ಬರಲಿದಿರ್ಗೊಳ್ಳೆನ್ನುತಲಿ॥
ಹರಿಸರುವೋತ್ತಮ ಲಕ್ಷ್ಮಿಮಿನಾಥನ
ಸ್ಮರಿಸುತಂಗಳದಲಿ ತೊಳಶಿಪ್ರದಕ್ಷಿಣೆ
ಎರಸಿ ಮಂಟಪಕೆ ಬರಲಂದೂ ॥ ೯ ॥

ಒಳಗಯ್ಯುತ ಬಲಗಾಲನು ಹೊಸ್ತಿಲ
ಒಳಗಿಡುತಲಿ ರನ್ನೆರೂಪಳ
ಚೆಲುವಳುಕಲು ಚೆಲುವಹ ಕದುರನು

ಕುಲದೇವನ ಮುಂದಿರಿಸುತಿಹ
ಕಳಕಳದಿಂದಲಿ ಹೊಳೆವ ಮಣೆ
ಮೇಲೊಳಗಿಟ್ಟು ಕುಕ್ಕುಟಪುರದೀಶಗೆ
ನಲವಿಂದ ಸಾಷ್ಟಾಂಗ ಎರಗಿದ ॥ ೧೦ ॥

ಹೀಗೆ ಕದಿರನ್ನು ಹೊತ್ತುಕೊಂಡು ಅಂಗಳದಲ್ಲಿರುವ ತುಳಸಿಕಟ್ಟೆಗೆ ಸುತ್ತುಬಂದು, ಮನೆಯೊಳಕ್ಕೆ ಬಲಗಾಲನ್ನು ಮೊದಲಿಟ್ಟು ಅಣ್ಣನು ಪ್ರವೇಶಿಸುತ್ತಾನೆ. ದೇವರ ಕೋಣೆಯಲ್ಲಿ ಕದಿರನ್ನು ದೇವರ ಮುಂದಿಟ್ಟು ಸಾಷ್ಟಾಂಗ ವಂದಿಸುತ್ತಾನೆ. ಈ ಸಮಯದಲ್ಲಿ ಹೆಣ್ಣಿನ ಹೃದಯವೂ ಭಕ್ತಿ ಪೂರ್ಣವಾಗಿರುತ್ತದೆ. ನಿಜವಾದ ಗೃಹಿಣಿಯೊಬ್ಬಳ ಪಾತ್ರಪರಿಚಯ ಇಲ್ಲಿ ಆಗುತ್ತದೆ:

ಭಾಗ್ಯಲಕ್ಷ್ಮಿ ಬಪ್ಪಾಗ ಬಾಗಿಲಲಿ ಕಾದಿದ್ದೆ
ಹೊಗು ಅಕ್ಷತೆಯ ಹರಿವಾಣ, ಹಿಡಿದಿದ್ದೆ
ಹೊಲಿಬಾರೆ ನಮ್ಮ ಮನೆ ತುಂಬಿ ॥ ೧೧ ॥

ಕದಿರಮ್ಮ ಬಪ್ಪಾಗ ಎದುಗೊಂಬಲಾನಿದ್ದೆ
ಗರತಿಯ ಪುಣ್ಯ ಗಳಿಸಿದ್ದೆ, ಮಾಲಕ್ಷ್ಮಿ
ಹೊಲಿಬಾರೆ ನಮ್ಮ ಮನೆ ತುಂಬಿ ॥ ೧೨ ॥

ಹೀಗೆ ಕದಿರಮ್ಮನನ್ನು ಎದುರ್ಗೊಳ್ಳಲಿಕ್ಕೆ ತನಗೊಂದು ಅಪೂರ್ವ ಪುಣ್ಯವೇ ಕಾರಣ ಎಂದು ಹೆಣ್ಣಿನ ಹೃದಯ ಹಿಗ್ಗುತ್ತದೆ. ಅಣ್ಣನ ಕದಿರ ಕೊಯ್ದು ಸೂಡಿಕಟ್ಟಿ ಹೊತ್ತು ತರುವ ದೃಶ್ಯವನ್ನು ಅವಳು ಮತ್ತೂ ಎಣಿಸಿ ಕೊಳ್ಳುತ್ತಾಳೆ:

ಪಚ್ಚೆಗುಪ್ಪಸಚಿಗುರಿ, ಕೆಚ್ಚಾನೆ ಕುಯ್ಗುರಳಿ
ಕೊಯ್ಲುರಕೆ ಕೂಸಿ ಮಣಿ ಮಾಡಿ, ಎದೆದುಂಬಿ
ಮದನನ ಸೇನೆ ನೆರೆದಿತ್ತು ॥ ೧೩ ॥

ಹೋಪಾಗ ಹೆಡಗೆಲಿ, ಬಪ್ಪಾಗ ದಂಡಿಗಲಿ
ಮದುಮಗಳಾಗಿ ತಲೆಬಾಗಿ, ಸಿರಿದೇವಿ
ಹೊಲಿಬಾರೆ ನಮ್ಮ ಮನೆತುಂಬಿ ॥ ೧೪ ॥

ಎಂದು ಆಹ್ವಾನಿಸುತ್ತಾಳೆ. ಅಣ್ಣನು ತಂದು ಕದಿರನ್ನು ಮನೆಗೆ ತುಂಬಿಸುತ್ತಾನೆ. ಆಗ ಅವಳ ಆನಂದಕ್ಕೆ ಪಾರಕ್ಕೆ ಇಲ್ಲವಾಗುತ್ತದೆ:

ಮಾಳಿಗೆ ತುಂಬಿತ್ತು ಚಾವಡಿ ತಲ್ಲಣಿಸಿತ್ತು
ಚಾವಡಿಯ ಕಂಬ ಅಲುಗಿತ್ತು, ನಡುಗಿತ್ತು
ಹೊಲಿಬಾರೆ ನಮ್ಮ ಮನೆತುಂಬಿ || ೧೫ ||

ಹಟ್ಟಿ ತುಂಬಿತ್ತು ನಮ್ಮ ಕೊಟ್ಟಿಗೆ ಮಾಲಿತ್ತು
ಕೊಟ್ಟಿಗೆಯ ಕಂಬವದುರಿತ್ತು, ಸಿರಿದೇವಿ
ಹೊಲಿಬಾರೆ ನಮ್ಮ ಮನೆತುಂಬಿ || ೧೬ ||

ಇಂದಿರೆ ಮಾದೇವಿ ಚೆಂದದ ಮನೆವಾಳ್ತಿ
ಯಂದದಿಸಾಗಿ ಸಲಹಂತೆ, ಕುಂದಣ
ದಾರತಿಯ ಬೆಳಗಿರೋ || ೧೭ ||

ಹೀಗೆ ಹೆಣ್ಣಿನ ಹೃದಯದಿಂದ ಕಾವ್ಯರಸವು ಸುರಿಯುತ್ತದೆ. ಬಾಳಿನ ಸಿಹಿ ಕಹಿಗಳ ಅನುಭವದೊಂದಿಗೆ ಬಯಕೆಯ ಸವಿಬೆರಸಿ ಹರಿಯುತ್ತದೆ. ಇಂಥಾ ವಾಹಿನಿಯು ಸಾವಿರಾರು ಕನ್ನಡಿಗರ ಹೃದಯ ನಂದನವನಗಳಲ್ಲಿ ಪ್ರವಹಿಸುತ್ತಾ ಬಂದಿದೆ, ಎಷ್ಟೋ ಜನಮನಗಳನ್ನು ತಣಿಸಿದೆ. ಆದರೆ ಇಂದಿನ ಕಾಲದಲ್ಲಿ ಮರುಭೂಮಿಯೇ ಅದಕ್ಕೆದುರಾಗಿ ಸಿಕ್ಕಿದೆ ಎನ್ನಬೇಕು. ಹರಿದೆಡೆಯಲ್ಲೆಲ್ಲ ಇಂಗಿಹೋಗುತ್ತದೆ. ಇಂದು ಜಾನಪದ ಸಾಹಿತ್ಯವು ಯಾರಿಗೂ ಬೇಡವಾಗಿದೆ. ಜಾನಪದ ಕಾವ್ಯದಲ್ಲಿ ಏನು ಕಮ್ಮಿ ಇದೆಯೋ? ಅದರಲ್ಲಿರುವಷ್ಟು ಸಹಜವಾದ ಸವಿ ಇನ್ನೆಲ್ಲಿದೆ? ಇದರಿಂದ, ನಾವಿಂದು ಇಂಗಿಹೋಗಿದ್ದ ಜಾನಪದ ಕಾವ್ಯರಸವನ್ನು ಅಗೆದು ತೆಗೆಯಬೇಕಾಗಿದೆ. ಇದಕ್ಕಾಗಿ ಹೆಚ್ಚು ಹೆಚ್ಚು ಕನ್ನಡಿಗರು ಮುಂದೆ ಬರಲಿ! ಹಿಂದೊಮ್ಮೆ ಕನ್ನಡವನ್ನು ಪಾವನವನ್ನಾಗಿ ಮಾಡಿದ ಆ ರಸವಾಹಿನಿಯು ನಮ್ಮೆಡೆಗೆ ಹರಿದುಬರಲಿ!!

# "ಒಂದಾಣೆ ಮಾಲೆ"ಯ ಲೇಖಕರ ಬಳಗ.

"ಒಂದಾಣೆ ಮಾಲೆ"ಯಲ್ಲಿ, ನಾಡಿನ ಪ್ರಸಿದ್ಧ ಲೇಖಕರು ಬರೆಯುತ್ತಿರುವರು. ಎಲ್ಲ ವಿಷಯಗಳ ಮೇಲೆ ಪುಸ್ತಕಗಳು ಹೊರಡುತ್ತಿವೆ. ವಾರಕ್ಕೊಂದು ಪುಸ್ತಕ; ಪ್ರತಿ ಶನಿವಾರ ಪ್ರಕಟಣೆ; ಪ್ರತಿಯೊಂದಕ್ಕೆ ಒಂದಾಣೆ.

"ಒಂದಾಣೆ ಮಾಲೆ"ಯ ಲೇಖಕರಲ್ಲಿ ಕೆಲವು ಹೆಸರುಗಳನ್ನು ಇಲ್ಲಿ ಕೊಟ್ಟಿರುವೆವು:

ಶ್ರೀ|ಗಳಾದ ರಾಷ್ಟ್ರಕವಿ ಗೋವಿಂದ ಪೈಯವರು, ಕೆ. ಎಸ್. ಶರ್ಮ-ವಿದ್ವಾನ್, ಕೆ. ಎಸ್. ಪದ್ಮನಾಭ ಆಚಾರ್ಯ--ವಿದ್ವಾನ್, ಎಮ್. ಸುಬ್ರಾಯನ್-ವಿದ್ವಾನ್, ಬಿ ಶಂಕರ ಭಟ್-ವಿದ್ವಾನ್, ಬಿ. ಎಮ್. ಶರ್ಮ-ವಿದ್ವಾನ್, ಬಳ್ಕೂರು ಸುಬ್ರಾಯ ಅಡಿಗ-ವಿದ್ವಾನ್, ಅಮ್ಮೆಂಬಳ ಅನಂತಯ್ಯ ನಾವಡ-ವಿದ್ವಾನ್, ಡಿ ಪುಟ್ಟಸ್ವಾಮಿ-ಎಡ್ವೊಕೇಟ್, ಕೋ. ಶ. ಕಾರಂತ-ಎಡ್ವೊಕೇಟ್, ಪಿ ಎಸ್. ವೆಂಕಟಕೃಷ್ಣರಾವ್, ಎಂ ಎ ,ಬಿ.ಟಿ , ಟಿ. ಚಂದ್ರರಾಜ ಸೆಟ್ಟಿ, "ನವಗಿರಿನಂದ", ಪಿ. ವೆಂಕಟರಮಣ ಭಟ್, ಬಿ. ದಾಮೋದರ ಬಾಳಿಗ, ಬಿ ಎ , ಅ ಗೌ. ಕಿನ್ನಿಗೋಳಿ-ವಿದ್ವಾನ್, ಸಂ. ಜ ರಾವ್, ಕೆ. ಸುಭಾಷಚಂದ್ರ ಶೆಣ್ಯೆ, ಜಿ ಆರ್. ಪಾಂಡೇಶ್ವರ್ (ಸಂಪಾದಕ: 'ಜಯ ಕರ್ನಾಟಕ'), ಎಲ್. ಎಸ್. ನಾಯಕ್, ಡಾ| ವಿ. ಆರ್. ಭಟ್, ಡಾ| ಎಸ್. ಪಿ. ಭಟ್, ವೈದ್ಯಗುರು ಎಂ ಆರ್. ಭಟ್. ಕುಡ್ಪಿ ವಾಸುದೇವ ಶೆಣ್ಯೆ, ಮೊದಲಾದವರು.

ದಿ| ಎಮ್. ಎನ್. ಕಾಮತರ ಪ್ರಹಸನಗಳು 'ಒಂದಾಣೆ ಮಾಲೆ' ಯಲ್ಲಿ ಪ್ರಕಟವಾಗಿವೆ. ಇನ್ನೂ ಕೆಲವು ಪ್ರಕಟವಾಗಲಿವೆ.

'ಒಂದಾಣೆ ಮಾಲೆ'ಯ ಯಾವ ಪ್ರಕಟಣೆಯೂ 16+4 ಪುಟಗಳಿಗಿಂತ ಕಡಿಮೆಯಾಗುವುದಿಲ್ಲ. ಕೆಲವು ಪ್ರಕಟಣೆಗಳಲ್ಲಿ 28, 32 ಅಥವಾ 36 ಪುಟಗಳಿರುವುವು.

ಎಲ್ಲ ನ್ಯೂಸ್ ಏಜಂಟರಲ್ಲೂ ಪುಸ್ತಕ ವ್ಯಾಪಾರಿಗಳಲ್ಲೂ ದೊರೆವುದು.

ಅಥವಾ

ಒಂದಾಣೆ ಮಾಲೆ,

ಪ್ರಭಾತ ಆಫೀಸು, ರಥಬೀದಿ, ಮಂಗಳೂರು-೧.

▪▪▪▪▪▪▪▪▪

Edited, Printed & Published by K. V. Shenoy
at The Prabhat Printers, Ltd., Mangalore.